

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1174 (1069) |
| ಮಾನ್ಯ ಸದಸ್ಯರ ಹೆಸರು | ಶ್ರೀ ಪ್ರಕಾಶ ಕೆ. ರಾಠೋಡ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 23/12/2021 |
| ಉತ್ತರಿಸುವವರು | ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಂಗಳೂರು ಇ.ಎಸ್.ಐ. ಆಸ್ಪತ್ರೆಯಲ್ಲಿ ಕಳೆದ 2 ವರ್ಷಗಳಿಂದ ಕರೋನದಿಂದ ಮೃತಪಟ್ಟವರ ಸಂಖ್ಯೆ ಎಷ್ಟು; | ಬೆಂಗಳೂರು ಇ.ಎಸ್.ಐ ಆಸ್ಪತ್ರೆಯಲ್ಲಿ ಕಳೆದ 2 ವರ್ಷಗಳಿಂದ ಕರೋನದಿಂದ ಮೃತಪಟ್ಟವರ ಸಂಖ್ಯೆ ಈ ಕೆಳಕಂಡಂತಿದೆ.<br>1. ಕಾರಾವಿ. ನಿಗಮದ ಮಾದರಿ ಆಸ್ಪತ್ರೆ, ರಾಜಾಜಿನಗರ, ಬೆಂಗಳೂರು - 339<br>2. ಕಾರಾವಿ. ನಿಗಮದ ಆಸ್ಪತ್ರೆ, ಪೀಣ್ಯ, ಬೆಂಗಳೂರು - 39<br>3. ಕಾರಾವಿ. ಆಸ್ಪತ್ರೆ, ಇಂದಿರಾನಗರ, ಬೆಂಗಳೂರು - 14 |
| (ಆ) | ಕರೋನಾ ವೈರಸ್‌ನಿಂದ ಮೃತಪಟ್ಟಂತಹ ಶವವನ್ನು 15 ತಿಂಗಳವರೆಗೆ ಶವಗಾರದಲ್ಲಿ ಇಟ್ಟರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?; | ಹೌದು<br>ಕಾರ್ಮಿಕರ ರಾಜ್ಯ ವಿಮಾ ನಿಗಮ, ಮೆಡಿಕಲ್ ಕಾಲೇಜ್ ಮತ್ತು ಪೋಸ್ಟ್ ಗ್ರಾಜುಯೇಟ್ ಇನಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಅಂಡ್ ರಿಸರ್ಚ, ರಾಜಾಜಿನಗರ, ಬೆಂಗಳೂರು (ESIC, Medical College and Post Graduate Institute of Medical Sciences and Research, Rajajinagar, Bengaluru) ಈ ಆಸ್ಪತ್ರೆಯು ಕೇಂದ್ರ ಸರ್ಕಾರದ ಕಾರ್ಮಿಕರ ರಾಜ್ಯ ವಿಮಾ ನಿಗಮದ ವ್ಯಾಪ್ತಿಗೆ ಬರುತ್ತದೆ. ಸದರಿ ನಿಗಮವು ನೀಡಿರುವ ಮಾಹಿತಿಯಂತೆ ರಾಜಾಜಿನಗರದ ಕಾರ್ಮಿಕರ ರಾಜ್ಯ ವಿಮಾ ನಿಗಮದ ಮಾದರಿ ಆಸ್ಪತ್ರೆಯ ಡೀನ್ ಮತ್ತು ವೈದ್ಯಕೀಯ ಅಧೀಕ್ಷಕರು, ಇವರು ತಮ್ಮ ಪತ್ರದ ದಿನಾಂಕ: 29-11-2021 ರಲ್ಲಿ ದಿನಾಂಕ: 27-11-2021 ರಂದು ಬೆಳಿಗ್ಗೆ 10.30ರ ಸಮಯದಲ್ಲಿ ಆಸ್ಪತ್ರೆಯ ಹಳೆಯ ಶವಾಗಾರದಲ್ಲಿ 02 ಶವಗಳು ಇರುವುದಾಗಿ ಆಡಳಿತದ ಗಮನಕ್ಕೆ ಬಂದಿದ್ದು, ತಕ್ಷಣ ಹತ್ತಿರದ ರಾಜಾಜಿನಗರ ಪೋಲಿಸ್ ಠಾಣೆಗೆ ಮಾಹಿತಿಯನ್ನು ನೀಡಿರುವುದಾಗಿ ತಿಳಿಸಿರುತ್ತಾರೆ. |
| (ಇ) | ಮೃತಪಟ್ಟ ಸಂಬಂಧಿಕರಿಗೆ ಶವವನ್ನು ನೀಡದಿರಲು ಕಾರಣವೇನು; ಈ ಬೇಜವಾಬ್ದಾರಿಗೆ ಕಾರಣವಾಗಿರುವವರ ಮೇಲೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | |

| | | |
|---|---|---|
| | | ಸದರಿ ವಿಷಯದ ಕುರಿತು/ಸುದ್ದಿ ಮಾಧ್ಯಮಗಳಲ್ಲಿ ಪ್ರಕಟವಾದ ಈ ಮಾಹಿತಿಯ ಹಿನ್ನೆಲೆಯಲ್ಲಿ ದಿನಾಂಕ: 29-11-2021 ರಂದೇ ತನಿಖೆಯನ್ನು ನಡೆಸುವ ಕುರಿತು ಹಾಗೂ ವರದಿ ಸಲ್ಲಿಸಲು ಸೂಚಿಸಲಾಗಿದೆ. ಕಾರ್ಮಿಕರ ರಾಜ್ಯ ವಿಮಾ ನಿಗಮದ ವತಿಯಿಂದ ಪ್ರಾಥಮಿಕ ವರದಿಯೊಂದಿಗೆ ತನಿಖೆ ನಡೆಸಲು ಹಿರಿಯ ಅಧಿಕಾರಿಗಳ ಒಂದು ಸಮಿತಿಯನ್ನು ರಚಿಸಿದ್ದು ಸದರಿ ಕಾರ್ಮಿಕರ ರಾಜ್ಯ ವಿಮಾ ನಿಗಮ, ನವದೆಹಲಿ ಇವರಿಂದ ರಚಿಸಲಾದ ಸಮಿತಿಯ ಅಧಿಕಾರಿಗಳು ದಿನಾಂಕ: 02-12-2021 ರಂದು ಕಾರ್ಮಿಕರ ರಾಜ್ಯ ವಿಮಾ ನಿಗಮ ಮಾದರಿ ಆಸ್ಪತ್ರೆ, ರಾಜಾಜಿನಗರ ಇಲ್ಲಿಗೆ ಭೇಟಿ ನೀಡಿದ್ದು ಕಾರ್ಮಿಕರ ರಾಜ್ಯ ವಿಮಾ ನಿಗಮ, ನವದೆಹಲಿ ಇವರಿಂದ ವರದಿಯನ್ನು ನಿರಿಕ್ಷೀಸಲಾಗುತ್ತಿದೆ ಎಂದು ತಿಳಿದುಬಂದಿರುತ್ತದೆ. ಅಲ್ಲದೆ ಕಾರ್ಮಿಕರ ರಾಜ್ಯ ವಿಮಾ ನಿಗಮವು ಆಸ್ಪತ್ರೆಯ ಡೀನ್‌ರವರನ್ನು ವರ್ಗಾಯಿಸಿ ಆ ಸ್ಥಳಕ್ಕೆ ಮತ್ತೊಬ್ಬರನ್ನು ನೇಮಿಸಲಾಗಿರುತ್ತದೆ. |

**ಕಾಇ 406 ಎಲ್ ಎಸ್ ಐ 2021**

**(ಅರಬೈಲ್ ಶಿವರಾಮ ಹೆಬ್ಬಾರ್)**

ಕಾರ್ಮಿಕ ಸಚಿವರು